## ಶ್ರೀ ವಾದಿರಾಜತೀರ್ಥ ಪೂಜ್ಯಚರಣ

ವಿರಚಿತ

# ಶ್ರೀ ರುದ್ರದೇವರ ಸುಳಾದಿ



ಸಂಪಾದಕ : ಅರವಿಂದಲೋಚನ

ಶ್ರೀ ವಾದಿರಾಜತೀರ್ಥ ಪೂಜ್ಯಚರಣ

ವಿರಚಿತ

# ಶ್ರೀ ರುದ್ರದೇವರ ಸುಳಾದಿ

ಸಂಪಾದಕ : ಅರವಿಂದಲೋಚನ

ಗತಶಾಲಿವಾಹನಶಕ ೧೯೪೨ ಚಾಂದ್ರಮಾನ

ಶಾರ್ವರೀ ನಾಮ ಸಂವತ್ಸರದ

ಹೇಮಂತಋತುವಿನ

ಮಾರ್ಗಶೀರ್ಷ ಮಾಸದ

ಕೃಷ್ಣ ಪಕ್ಷದ ನವಮೀ ತಿಥಿಯಂದು ಈ ಗ್ರಂಥವು

ಪ್ರಕಟ

# ಶ್ರೀ ರುದ್ರದೇವರ ಸುಳಾದಿ

## ರಾಗ :ಆನಂದಭೈರವಿ

## ಧ್ರುವತಾಳ

ಅಂಬಿಕಾಪತಿ ಉಮಾಪತಿಯೆಂದು ವೇದ ತ್ರಿ-
ಯಂಬಕನ ಗೌರಿಯರಸನ ತುತಿಸುತಿದಕೊ
ಸಾಂಬಶಿವನೆಂಬುವನು ಇವನೆ ಆದಡೆ ಜಡೆಯ
ಸಂಭ್ರಮದಿಂದ ಗಂಗೆ ಗರ್ವಿಸುವಳು
'ಡಂಭ ಏಕೋರುದ್ರನದ್ವಿತೀಯವದನ್ತೌ'
ಯೆಂಬ ಶ್ರುತಿ ಇನ್ನೊಬ್ಬ ಶಿವನಿಗವಸಖನು ಒ-
ಡಂಬಡದು ವಿಷ್ಣುವೆಂಬವತಾರ ಮೂಲರೂಪ

ಸಂಭವಿಪ ಬ್ರಹ್ಮರುದ್ರರ ಸೃಷ್ಟಿಗೆ

ಇಂಬು ಸಲ್ಲುವುದು 'ಸೃಷ್ಟ್ಯಾಧಿಕಾ ಏಕೋ ಮಹಾನೀ'

ಯೆಂಬ ಹಿರಿಯರ ಮತವ ಸುಮತವೆಂದು

ನಂಬು ದನುಜ ಸ್ತಂಭಸಂಭವ ರುದ್ರಶೀರ್ಷಕನು

ಪುರಹರನೆ ಗಡ

ಅಂಬುಜಾಕ್ಷ ಹಯವದನ ಅಖಿಳರೊಡೆಯ ||1||

## ಮಟ್ಟತಾಳ

ಆರು ಪುರಾಣ ಗೌರಿಯ ಗಂಡನವು ಮ-

ತ್ತಾರು ಪುರಾಣ ಚತುರಮುಖನವು

ಆರು ಪುರಾಣ ಹಯವದನನವು

ತೋರೊ ಸಾಂಬಶಿವನ ಪುರಾಣವ

ಭಾರತ ಪುರಾಣದೊಳಗಿಲ್ಲದ ಕಾರಣ ಶಶಶೃಂಗ ನಿನ್ನ
ಶಿವ ||2||

## ತ್ರಿಪುಟತಾಳ

ಕೈಲಾಸ ರುದ್ರನದು ವೈಕುಂಠಲೋಕ ನಮ್ಮ
ಶ್ರೀಲೋಲನಿಹಲೋಕ ಜಲಜಸಂಭವನಿಗೆ
ಮೂಲೋಕವಲ್ಲದೆ ಮೇಲಿನ ಸತ್ಯಲೋಕ
ಪೇಳೊ ನಿನ್ನ ಸಾಂಬಶಿವನ ಲೋಕ
ಖೂಳಜನರೊಡನಾಡದಿರು ದುರುಕ್ತಿಯನು ಬಿಡು
ಸಾರೊ ಸಜ್ಜನ ಕುಲದೈವ ಹಯವದನನ್ನ
ಆಳಾಗಿ ಬದುಕು ಶ್ರೀಹರಿ ಸರ್ವೋತ್ತಮನೆಂಬ
ಸಾರಮತವನು ಸೇವಿಸು ಮನುಜ ||3||

## ರೂಪಕತಾಳ

ಶ್ರುತಿ ಪುರಾಣದೊಳಿಲ್ಲದ ಕ್ಷಿತಿಯೊಳರ್ಚನೆಗಲ್ಲದಾ-
ದಿತಿ ದೇವಕ್ಕಳೊಲ್ಲದ ಮತಿವಂತರ[ಮುಂದೆ]ನಿಲ್ಲದ
ಮತವಿದ್ಯಾತಕೊ ಸಲ್ಲದು ನಮ್ಮ
ಗತಿ ಹಯವದನ ಬಲ್ಲಿದ ||4||

## ಝಂಪೆತಾಳ

ಪರಶಿವ ನಿರಾಕಾರನಾದಡೆ ನಿರ್ಗುಣ ಬೊಮ್ಮ
ಹರಶಿವಾದಿ ಪೆಸರು ಪಂಚಮುಖನಿಗಲ್ಲದೆ ಸಲ್ಲ
ಶರೀರವೆರಸಿದಡೆ ಜನ್ಮ ಮರಣಗಳು ಬಿಡವು ನಿನ್ನ
ದುರುತ್ಸಹ ಬರಿದೆ ಹೋಯಿತು
ಪರಶಿವ ಪರದೇವನೆಂದು ವಾಸುದೇವಗೆ ಸಾ-

ಸಿರನಾಮದೊಳಿದ್ದ ಕಾರಣ ಪರಶಿವನವನೆ
ಪೆರತೊಬ್ಬ ಶಿವನಿಲ್ಲ ಪರಾತ್ಪರ ನಮ್ಮ
ಸಿರಿದೇವಿಯರಸ ಹಯವದನ ಕಾಣೊ ||5||

## ರೂಪಕತಾಳ

ತ್ರಯತ್ರಿಂಶದ್ವೈದೇವಾ ಸೋಮಪಾ-ಯೆಂದು
ಪ್ರಿಯಾತ್ರಿಯಧಾಮ ಮೂವರು ಜೀವರು ನಿ-
ಶ್ಚಯಿಸಿ ಪೇಳಿದ ಕಾರಣದಿ ಇನ್ನೊಂದು
ಹೆದ್ದೈವ ಮತ್ತೆಲ್ಲಿಹುದೊ
ನ್ಯಾಯವೆಲ್ಲಿಹುದೊ ಪೇಳೆಲೊ ಕುವಾದಿ

ನ್ಯಾಯಕೋವಿದರೊಳು ಶ್ರೀ

ಹಯವದನನ ಬೊಮ್ಮ ಶಿವರೆಂಬೊ ಈ

ನ್ಯಾಯವು ತಪ್ಪದು ಇನ್ನೊಬ್ಬರೊಪ್ಪರೊ ||6||

## ಜತೆ

ಹಯವದನನೇಗತಿ ಹಯವದನನೇ ಪತಿ

ಹಯವದನನೇ ಸುರಪತಿ ಸುರಾಸುರರುಗಳಿಗೆ

## ||ಶ್ರೀ ಕೃಷ್ಣಾರ್ಪಣಮಸ್ತು||

## ||ಶ್ರೀ ಮಧ್ವೇಶಾರ್ಪಣಮಸ್ತು||

ನ್ಯಾಯಕೋವಿದರೊಳು ಶ್ರೀ

ಹಯವದನನ ಬೊಮ್ಮ ಶಿವರೆಂಬೊ ಈ

ನ್ಯಾಯವು ತಪ್ಪದು ಇನ್ನೊಬ್ಬರೊಪ್ಪರೊ ||6||

## ಜತೆ

ಹಯವದನನೇಗತಿ ಹಯವದನನೇ ಪತಿ

ಹಯವದನನೇ ಸುರಪತಿ ಸುರಾಸುರರುಗಳಿಗೆ

## ||ಶ್ರೀ ಕೃಷ್ಣಾರ್ಪಣಮಸ್ತು||

## ||ಶ್ರೀ ಮಧ್ವೇಶಾರ್ಪಣಮಸ್ತು||